

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 520 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 11.12.2020 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯ ಸರ್ಕಾರವು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದ ನೇಕಾರರಿಂದ ಪರಿಹಾರೋಪಾಯ ವಾಗಿ ಕೊರೋನಾ ವಾರಿಯರ್ಸ್ ಗಳಿಗೆ ನೀಡಲು ರಾಜ್ಯದ ಸೀರೆ ಖರೀದಿಸುವುದಾಗಿ ಭರವಸೆ ನೀಡಲಾಗಿದೆಯೇ; | ನೇಕಾರರು ಉತ್ಪಾದಿಸಿ ವಿಲೆಯಾಗದೇ ದಾಸ್ತಾನಾಗಿರುವ ಸೀರೆಗಳನ್ನು ಖರೀದಿಸಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ವ್ಯಾಪ್ತಿಗೆ ಬರುವ ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಸಹಾಯಕಿಯರು, ಪೌರಾಡಳಿತ ಇಲಾಖೆಯ ವ್ಯಾಪ್ತಿಗೆ ಬರುವ ಪೌರ ಕಾರ್ಮಿಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ವ್ಯಾಪ್ತಿಗೆ ಬರುವ ಆಶಾ ಕಾರ್ಯಕರ್ತೆಯರು ಹಾಗೂ ಅಗ್ನಿಶಾಮಕ, ನಾಗರಿಕ ಸಂರಕ್ಷಣೆ ಮತ್ತು ಹೋಂ ಗಾರ್ಡ್ ಇಲಾಖೆ ವ್ಯಾಪ್ತಿಗೆ ಬರುವ ಹೋಂ ಗಾರ್ಡ್ಸ್ ಮತ್ತು ನಾಗರಿಕ ಸಂರಕ್ಷಕರ ಸಂಖ್ಯೆಯನ್ನಾಧರಿಸಿ ಪ್ರತಿಯೊಬ್ಬ ಮಹಿಳಾ ಸಿಬ್ಬಂದಿಗೆ ರೂ.500/- ರಿಂದ ರೂ.600/- ರವರೆಗಿನ ಮೌಲ್ಯದ ತಲಾ 2 ಸೀರೆಯಂತೆ ಒಟ್ಟು 6 ಲಕ್ಷ ಸೀರೆಗಳಿಗೆ ರೂ.36.00 ಕೋಟಿ ಅನುದಾನ ನೀಡಲು ಪ್ರಸ್ತಾಪಿಸಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಅನುಮೋದನೆಗಾಗಿ ಕಳುಹಿಸಲಾಗಿದ್ದು, ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ತಿರಸ್ಕರಿಸಿದ್ದರ ಹಿನ್ನೆಲೆಯಲ್ಲಿ ಮತ್ತೊಮ್ಮೆ ಮರು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿರುತ್ತದೆ. |
| (ಆ) | ಈ ರೀತಿಯ ಸೀರೆ ಖರೀದಿಯನ್ನು ಯಾವ ಯಾವ ಜಿಲ್ಲೆಗಳಿಂದ ಮಾಡಲಾಗಿದೆ(ವಿವರ ಒದಗಿಸುವುದು) | ರಾಜ್ಯದ ಯಾವುದೇ ಜಿಲ್ಲೆಗಳಲ್ಲಿಯೂ ಖರೀದಿಸಿರುವುದಿಲ್ಲ |
| (ಇ) | ಖರೀದಿಸಲಾದ ಸೀರೆಗಳಿಗೆ ನೇಕಾರರಿಗೆ ಹಣ ಪಾವತಿಸ ಲಾಗಿದೆಯೇ; | ಅನ್ವಯಿಸುವುದಿಲ್ಲ |
| (ಈ) | ಕೊರೋನಾ ಸಮಯದಲ್ಲಿ ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದ ನೇಕಾರರಿಗೆ ಯಾವ ರೀತಿ ಪರಿಹಾರ ಒದಗಿಸಲಾಗಿದೆ (ವಿವರ ಒದಗಿಸುವುದು). | ರಾಜ್ಯದಲ್ಲಿನ ಕೈಮಗ್ಗ ನೇಕಾರರಿಗೆ "ನೇಕಾರ ಸಮ್ಮಾನ್ ಯೋಜನೆ" ಯನ್ನು ಘೋಷಿಸುವ ಮೂಲಕ ಪ್ರತಿ ಕೈಮಗ್ಗ ನೇಕಾರರಿಗೆ ವಾರ್ಷಿಕ ರೂ.2,000/-ಗಳ ಆರ್ಥಿಕ ನೆರವನ್ನು ನೇರ ನಗದು ವರ್ಗಾವಣೆ ಮುಖಾಂತರ ನೀಡಲು ಆದೇಶವನ್ನು ಹೊರಡಿಸಲಾಗಿದೆ.<br><br>ಸದರಿ ಯೋಜನೆಯಡಿ ಇದುವರೆಗೆ 50511 ನೇಕಾರರು ಅರ್ಜಿಗಳನ್ನು ನೊಂದಾಯಿಸಿದ್ದು, ಇದುವರೆಗೆ 46259 ನೇಕಾರರಿಗೆ ರೂ.925.18 ಲಕ್ಷಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ವರ್ಗಾಯಿಸಲಾಗಿರುತ್ತದೆ.<br><br>"ಕೋವಿಡ್-19 ಪ್ರಯುಕ್ತ ವಿದ್ಯುತ್ ಮಗ್ಗ ನೇಕಾರರಿಗೆ ಆರ್ಥಿಕ ಬೆಂಬಲ ನೀಡುವ" ಸಂಬಂಧ ರಾಜ್ಯದಲ್ಲಿರುವ 1.25 ಲಕ್ಷ ವಿದ್ಯುತ್ ಚಾಲಿತ ಮಗ್ಗಗಳಲ್ಲಿ ಪ್ರತಿ ವಿದ್ಯುತ್ ಚಾಲಿತ ಮಗ್ಗಗಳಲ್ಲಿ ಕೆಲಸ ಮಾಡುತ್ತಿರುವ ಒಬ್ಬ ಕೂಲಿ ಕಾರ್ಮಿಕರಿಗೆ ಒಂದು ಬಾರಿಗೆ ಮಾತ್ರ ಅನ್ವಯಿಸುವಂತೆ ರೂ.2,000/-ಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ನೀಡಲು ಆದೇಶ ಹೊರಡಿಸಲಾಗಿದೆ.<br><br>ಸದರಿ ಯೋಜನೆಯಡಿ ಇದುವರೆಗೆ 56449 ನೇಕಾರರು ಅರ್ಜಿಗಳನ್ನು ನೊಂದಾಯಿಸಿದ್ದು, ಇದುವರೆಗೆ 48004 ನೇಕಾರರಿಗೆ ರೂ.960.08 ಲಕ್ಷಗಳ ಪರಿಹಾರಧನವನ್ನು ನೇರ ನಗದು ವರ್ಗಾವಣೆ ಮುಖಾಂತರ ವರ್ಗಾಯಿಸಲಾಗಿದೆ. |

ಸಂ: ವಾಕೈ 260 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು